# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 276
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ಸಚಿವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು
4. ಉತ್ತರಿಸುವ ದಿನಾಂಕ : 17.02.2022.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ ಹಾಗೂ ಅನುದಾನಿತ ಕಾನೂನು ಕಾಲೇಜುಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ರಾಜ್ಯದಲ್ಲಿರುವ ಸರ್ಕಾರಿ ಕಾನೂನು ಕಾಲೇಜುಗಳು -07<br>ಅನುದಾನಿತ ಕಾಲೇಜುಗಳು -27<br>ಒಟ್ಟು 34<br><br>(ವಿವರಗಳನ್ನು **ಅನುಬಂಧ-1 & 2** ರಲ್ಲಿ ಸಲ್ಲಿಸಿದೆ) |
| ಆ) | ಸದರಿ ಕಾಲೇಜುಗಳಲ್ಲಿ ವೃಂದವಾರು ಖಾಲಿ ಇರುವ ಬೋಧಕ / ಬೋಧಕೇತರ ಹುದ್ದೆಗಳ ಸಂಖ್ಯೆ ಎಷ್ಟು; | ಸರ್ಕಾರಿ ಹಾಗೂ ಅನುದಾನಿತ ಕಾನೂನು ಕಾಲೇಜುಗಳಲ್ಲಿ ಖಾಲಿಯಿರುವ ಬೋಧಕ-ಬೋಧಕೇತರ ಹುದ್ದೆಗಳ ಸಂಖ್ಯಾ ಮಾಹಿತಿ ಕೆಳಕಂಡಂತಿರುತ್ತದೆ.<br><br>(ವೃಂದಾವಾರು ಖಾಲಿಯಿರುವ ಹುದ್ದೆಗಳ ವಿವರವನ್ನು **ಅನುಬಂದ-3 & 4** ರಲ್ಲಿ ನೀಡಲಾಗಿದೆ). |

| ಕ್ರ ಸಂ | ಕಾಲೇಜುಗಳು | ಬೋಧಕರು | ಬೋಧಕೇತರರು |
|---|---|---|---|
| 1 | ಸರ್ಕಾರಿ ಕಾಲೇಜುಗಳು | 34 | 39 |
| 2 | ಅನುದಾನಿತ ಕಾನೂನು ಕಾಲೇಜುಗಳು | 95 | 147 |

| | | |
|---|---|---|
| ಇ) | ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಕಾನೂನು ಕಾಲೇಜುಗಳಲ್ಲಿ ವಿವಿಧ ವಿಷಯಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳೂ ಒಳಗೊಂಡಂತೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ 1242 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಯು.ಜಿ.ಸಿ. ನಿಯಮಗಳನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಇಲಾಖೆಯ ಅಂತಿಮ ವಿಶೇಷ ನೇಮಕಾತಿ ನಿಯಮಾವಳಿಗಳನ್ನು ರೂಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019(ಭಾ-3), ದಿನಾಂಕ: 08.07.2020 ಮತ್ತು ತಿದ್ದುಪಡಿ ಅಧಿಸೂಚನೆ ದಿನಾಂಕ:19.10.2020 ರಲ್ಲಿ ಪ್ರಕಟಿಸಲಾಗಿದೆ. ಸದರಿ ವಿಶೇಷ ನೇಮಕಾತಿ ನಿಯಮಗಳನ್ವಯ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:26.08.2021 ರ ಸಂಖ್ಯೆ:ಇಡಿ/257/ ಡಿಸಿಇ/2019 ರಲ್ಲಿ ಅಧಿಸೂಚನೆ ಹೊರಡಿಸಿದ್ದು, ಅದರಂತೆ ಆಯ್ಕೆ ಪ್ರಾಧಿಕಾರವಾದ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಿ, ಅಧಿಸೂಚನೆ ಹೊರಡಿಸಿದೆ.<br><br>ಉಪನ್ಯಾಸಕರ ಹುದ್ದೆಗಳ ಭರ್ತಿಗೆ ಸಂಬಂಧಿಸಿದಂತೆ, ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಆಯ್ಕೆ ಮಾಡಿದ ಅಭ್ಯರ್ಥಿಗಳ ಆಯ್ಕೆಪಟ್ಟಿಯನ್ನು ಸರ್ಕಾರ/ಇಲಾಖೆಗೆ ನೀಡಿದ ನಂತರ ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ನಿಯಮಾನುಸಾರ ಕ್ರಮ ವಹಿಸಲಾಗುವುದು. ಮುಂದುವರೆದು, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕೋಲಾರದ ಸರ್ಕಾರಿ ಕಾನೂನು ಕಾಲೇಜಿನಲ್ಲಿ ವಿವಿಧ ವಿಷಯಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಬೋಧನಾ ಕಾರ್ಯಭಾರವನ್ನು ನಿರ್ವಹಿಸಲು ಅತಿಥಿ ಉಪನ್ಯಾಸಕರನ್ನು ನೇಮಿಸಿಕೊಂಡು ಪಾಠ-ಪ್ರವಚನಗಳನ್ನು ನಡೆಸಲಾಗುತ್ತಿದೆ.<br><br>ಬೋಧಕೇತರ ಹುದ್ದೆಗಳಲ್ಲಿ ಸರ್ಕಾರಿ ಕಾನೂನು ಕಾಲೇಜುಗಳೂ ಒಳಗೊಂಡಂತೆ ಇಲಾಖೆಯಲ್ಲಿನ ಪ್ರಥಮ ದರ್ಜೆ ಮತ್ತು ದ್ವಿತೀಯ ದರ್ಜೆ ಸಹಾಯಕರ ಒಟ್ಟು 211 ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕರ್ನಾಟಕ ಲೋಕ ಸೇವಾ ಆಯೋಗವು ನೇಮಕಾತಿಗೆ ಅಧಿಸೂಚನೆಯನ್ನು ಹೊರಡಿಸಿದ್ದು, ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ನೀಡಿದ ನಂತರ ಸದರಿ ಖಾಲಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುವುದು ಹಾಗೂ ಖಾಲಿ ಇರುವ ಗ್ರೂಪ್-ಡಿ ಸಿಬ್ಬಂದಿಗಳ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| | | ಇಲಾಖಾ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾನೂನು ಕಾಲೇಜುಗಳಿಗೆ ಸಂಬಂದಿಸಿದಂತೆ ಕೋವಿಡ್-19 ಪ್ರಯುಕ್ತ ಸರ್ಕಾರವು ಆರ್ಥಿಕ ಮಿತವ್ಯಯ ಆದೇಶ ಜಾರಿಗೊಳಿಸಿರುವುದರಿಂದ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತುತ ಯಾವುದೇ ಕ್ರಮಗಳನ್ನು ಕೈಗೊಳ್ಳುತ್ತಿಲ್ಲ. |
| ಈ) | ಯಾವ ಕಾಲಮಿತಿಯಲ್ಲಿ ಸದರಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು; | ಸರ್ಕಾರಿ ಕಾನೂನು ಕಾಲೇಜುಗಳಲ್ಲಿನ ಹುದ್ದೆ ಭರ್ತಿಗೆ ಸಂಬಂಧಿಸಿದಂತೆ ಕ್ರಮ ಸಂಖ್ಯೆ (ಇ) ರಲ್ಲಿವಿವರಿಸಲಾಗಿದೆ.<br><br>ಖಾಸಗಿ ಅನುದಾನಿತ ಕಾನೂನು ಕಾಲೇಜುಗಳಲ್ಲಿನ ಹುದ್ದೆಭರ್ತಿಗೆ ಸಂಬಂಧಿಸಿದಂತೆ ಸರ್ಕಾರವು ಆರ್ಥಿಕಮಿತವ್ಯಯ ಆದೇಶವನ್ನು ಸಡಿಲಿಸಿ ಖಾಲಿ ಹುದ್ದೆಗಳನ್ನು ಭರ್ತಿಮಾಡಲು ಅನುಮತಿ ನೀಡಿದ ನಂತರ ಮುಂದಿನ ಅಗತ್ಯ ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಲಾ-ಹೆಚ್‌ಆರ್‌ಎಮ್/38/2022**

(ಜೆ.ಸಿ. ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

**ಅನುಬಂಧ-1**

# ಕಾನೂನು ಇಲಾಖೆ (ಮಾನವ ಹಕ್ಕುಗಳ ಶಾಖೆ)

**ಕಾಲೇಜು ಶಿಕ್ಷಣ ಇಲಾಖೆ ಇಲಾಖಾ ವ್ಯಾಪ್ತಿಗೊಳಪಡುವ ಸರ್ಕಾರಿ ಕಾನೂನು ಕಾಲೇಜುಗಳ ಪಟ್ಟಿ**

| ಕ್ರಮ ಸಂಖ್ಯೆ | ಕಾನೂನು ಕಾಲೇಜಿನ ಹೆಸರು |
|---|---|
| 1 | ಸರ್ಕಾರಿ ಕಾನೂನು ಕಾಲೇಜು, ರಾಮನಗರ |
| 2 | ಸರ್ಕಾರಿ ಕಾನೂನು ಕಾಲೇಜು, ಕೋಲಾರ |
| 3 | ಸರ್ಕಾರಿ ಕಾನೂನು ಕಾಲೇಜು, ಹಾಸನ |
| 4 | ಸರ್ಕಾರಿ ಕಾನೂನು ಕಾಲೇಜು, ಹೊಳೆನರಸೀಪುರ |
| 5 | ವಿಜ್ಞಾನೇಶ್ವರ ಸರ್ಕಾರಿ ಕಾನೂನು ಕಾಲೇಜು, ಚಿತ್ತಾಪುರ, ಕಲಬುರಗಿ |
| 6 | ಸರ್ಕಾರಿ ಕಾನೂನು ಕಾಲೇಜು, ಚಾಮರಾಜನಗರ (ಪ್ರಾರಂಭವಾಗಿರುವುದಿಲ್ಲ) |
| 7 | ಸರ್ಕಾರಿ ಕಾನೂನು ಕಾಲೇಜು, ಹಾವೇರಿ (ಪ್ರಾರಂಭವಾಗಿರುವುದಿಲ್ಲ) |

(ಸೋನಿಕಾ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಾನೂನು ಇಲಾಖೆ (ಮಾನವ ಹಕ್ಕುಗಳು)

**ಅನುಬಂಧ-2**

# ಕಾನೂನು ಇಲಾಖೆ (ಮಾನವ ಹಕ್ಕುಗಳ ಶಾಖೆ)

| ಇಲಾಖಾ ವ್ಯಾಪ್ತಿಗೊಳಪಡುವ ಖಾಸಗಿ ಅನುದಾನಿತ ಕಾನೂನು ಕಾಲೇಜುಗಳ ಪಟ್ಟಿ | |
|---|---|
| ಕ್ರಮ ಸಂಖ್ಯೆ | ಕಾನೂನು ಕಾಲೇಜಿನ ಹೆಸರು |
| 1 | ಆರ್.ಎಲ್.ಕಾನೂನು ಕಾಲೇಜು, ಬೆಳಗಾವಿ |
| 2 | ಶಾರದಾ ವಿಲಾಸ ಕಾನೂನು ಕಾಲೇಜು, ಮೈಸೂರು |
| 3 | ಜೆ.ಎಸ್.ಎಸ್.ಸಕ್ರಿ ಕಾನೂನು ಕಾಲೇಜು, ಹುಬ್ಬಳ್ಳಿ |
| 4 | ಎಂ.ಇ.ಎಸ್ ಕಾನೂನು ಕಾಲೇಜು, ಶಿರಸಿ |
| 5 | ಶೇಠ ಶಂಕರಲಾಲ್ ಲಾಹೋಟಿ ಕಾನೂನು ಕಾಲೇಜು, ಕಲಬುರ್ಗಿ |
| 6 | ಸಿ.ಬಿ.ಆರ್. ನ್ಯಾಷನಲ್ ಕಾನೂನು ಕಾಲೇಜು, ಶಿವಮೊಗ್ಗ |
| 7 | ಎಂ.ಕೃಷ್ಣ ಕಾನೂನು ಕಾಲೇಜು, ಹಾಸನ |
| 8 | ಸಿದ್ಧಾರ್ಥ ಕಾನೂನು ಕಾಲೇಜು, ಕಲಬುರ್ಗಿ |
| 9 | ವಿದ್ಯೋದಯ ಕಾನೂನು ಕಾಲೇಜು, ತುಮಕೂರು |
| 10 | ಸರಸ್ವತಿ ಕಾನೂನು ಕಾಲೇಜು, ಚಿತ್ರದುರ್ಗ |
| 11 | ಆರ್.ಎಲ್.ಕಾನೂನು ಕಾಲೇಜು, ದಾವಣಗೆರೆ |
| 12 | ವಿ.ವಿ.ಪುರಂ ಕಾನೂನು ಕಾಲೇಜು, ಬೆಂಗಳೂರು |
| 13 | ಎಸ್.ವಿ.ಮಾನ್ವಿ ಕಾನೂನು ಕಾಲೇಜು, ಗದಗ |
| 14 | ಜಿ.ಕೆ.ಕಾನೂನು ಕಾಲೇಜು, ಹುಬ್ಬಳ್ಳಿ |
| 15 | ಸೇಠ್ ಚುನಿಲಾಲ್ ಅಮರ್‌ಚಂದ್ ಬೊಹರಾ ಕಾನೂನು ಕಾಲೇಜು, ರಾಯಚೂರು |
| 16 | ಎಸ್.ಡಿ.ಎಂ.ಕಾನೂನು ಕಾಲೇಜು, ಮಂಗಳೂರು |
| 17 | ವಿದ್ಯಾವರ್ಧಕ ಕಾನೂನು ಕಾಲೇಜು, ಮೈಸೂರು |
| 18 | ಕೆ.ಎಲ್.ಇ. ಕಾನೂನು ಕಾಲೇಜು, ಬೆಂಗಳೂರು |
| 19 | ಆರ್.ವಿ.ಬಿಡಪ್ ಕಾನೂನು ಕಾಲೇಜು, ಬೀದರ್ |
| 20 | ವುಂಕಿ ಸಣ್ಣ ರುದ್ರಪ್ಪ ಕಾನೂನು ಕಾಲೇಜು, ಬಳ್ಳಾರಿ |
| 21 | ಕೆ.ಪಿ.ಇ.ಎಸ್ ಕಾನೂನು ಕಾಲೇಜು, ಧಾರವಾಡ |
| 22 | ಬಿ.ವಿ.ಬೆಲ್ಲದ್ ಕಾನೂನು ಕಾಲೇಜು, ಬೆಳಗಾವಿ |
| 23 | ಜೆ.ಎಸ್.ಎಸ್.ಕಾನೂನು ಕಾಲೇಜು, ಮೈಸೂರು |
| 24 | ಅಂಜುಮನ್ ಕಾನೂನು ಕಾಲೇಜು, ವಿಜಯಪುರ |
| 25 | ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ |
| 26 | ವಿವೇಕಾನಂದ ಕಾನೂನು ಕಾಲೇಜು, ಬೆಂಗಳೂರು |
| 27 | ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ |

(ಸೋನಿಕಾ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಾನೂನು ಇಲಾಖೆ (ಮಾನವ ಹಕ್ಕುಗಳು)

ಅನುಬಂಧ-3

# ಕಾನೂನು ಇಲಾಖೆ (ಮಾನವ ಹಕ್ಕುಗಳ ಶಾಖೆ)

ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಕಾನೂನು ಕಾಲೇಜುಗಳಲ್ಲಿ ಖಾಲಿಯಿರುವ ಬೋಧಕ/ಬೋಧಕೇತರ ಹುದ್ದೆಗಳ ವೃಂದವಾರು ವಿವರ

| SL. NO. | COLLEGE NAME | ಬೋಧಕರು | | | | | | | | | | ಬೋಧಕೇತರರು | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | PRINCIPAL | ENGLISH | KANNADA | ECONOMICS | HISTORY | LAW | POL. SCIENCE | SOCIOLOGY | LIBRARIAN | TOTAL | SUPERINTENDENT | F.D.A | S.D.A | TYPIST | LIBRARY ASSISTANT | ATTENDER | PEON | TOTAL |
| 1 | Govt. Law College, Ramanagar - 562128 | 1 | 0 | 0 | 1 | 0 | 2 | 0 | 0 | 0 | **4** | 0 | 1 | 0 | 1 | 1 | 3 | 3 | **9** |
| 2 | Govt. Law College, Kolar - 563 101 | 1 | 0 | 0 | 0 | 0 | 4 | 1 | 0 | 1 | **7** | 0 | 1 | 2 | 1 | 1 | 1 | 2 | **8** |
| 3 | Govt. Law College, Hassan - 573 201 | 1 | 0 | 0 | 0 | 0 | 0 | 0 | 0 | 0 | **1** | 0 | 1 | 0 | 1 | 1 | 3 | 3 | **17** |
| 4 | Govt. Law College, Holenarasipura - 573 211 | 1 | 0 | 0 | 0 | 0 | 3 | 1 | 0 | 0 | **5** | 1 | 0 | 0 | 1 | 1 | 3 | 3 | **9** |
| 5 | Vijnaneshwar Govt Law College, Maratur, Gulbarga | 1 | 0 | 0 | 0 | 0 | 3 | 0 | 0 | 0 | **4** | 0 | 0 | 0 | 0 | 0 | 0 | 3 | **3** |
| 6 | Govt. Law College, Chamarajanagar | 1 | 1 | 1 | 0 | 0 | 8 | 1 | 1 | 0 | **13** | 0 | 0 | 1 | 0 | 0 | 0 | 0 | **12** |
| | ಒಟ್ಟು | **6** | **1** | **1** | **1** | **0** | **20** | **3** | **1** | **1** | **34** | **1** | **3** | **3** | **4** | **4** | **10** | **14** | **39** |

(ಸೋನಿಕಾ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಾನೂನು ಇಲಾಖೆ (ಮಾನವ ಹಕ್ಕುಗಳು)

ಅನುಬಂಧ-4

# ಕಾನೂನು ಇಲಾಖೆ (ಮಾನವ ಹಕ್ಕುಗಳ ಶಾಖೆ)

**ಕಾಲೇಜು ಶಿಕ್ಷಣ ಇಲಾಖೆ ಇಲಾಖಾ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾನೂನು ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ-ಬೋಧಕೇತರ ಹುದ್ದೆಗಳ ಮಾಹಿತಿ (ವೃಂದಾವಾರು)**

| | | ಬೋಧಕರು | | | | | ಬೋಧಕೇತರರು | | | | | | | | | |
|---|---|---|---|---|---|---|---|---|---|---|---|---|---|---|---|---|
| ಕ್ರ. ಸಂ. | ಪ್ರಾದೇಶಿಕ ಜಂಟಿ ನಿರ್ದೇಶಕರ ಕಛೇರಿ | ಪ್ರಾಂಶುಪಾಲರು | ಸಹಾಯಕ ಪ್ರಾಧ್ಯಾಪಕರು | ದೈಹಿಕ ಶಿಕ್ಷಣ ಬೋಧಕರು | ಗ್ರಂಥಪಾಲಕರು | ಒಟ್ಟು | ಮ್ಯಾನೇಜರ್ | ಅಧೀಕ್ಷಕರು | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು | ಗು-ಯಾ-ಬೆ | ಬೆರಳಚ್ಚು ಗಾರರು | ಗ್ರಂಥಾಲಯ ಸಹಾಯಕರು | ಸಹಾಯಕರು | ಪರಿಚಾರಕರು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| 1 | ಬೆಂಗಳೂರು | 1 | 23 | 3 | 0 | 27 | 0 | 4 | 2 | 5 | 2 | 2 | 0 | 4 | 10 | 29 |
| 2 | ಮೈಸೂರು | 1 | 8 | 1 | 1 | 11 | 0 | 3 | 1 | 5 | 1 | 0 | 0 | 8 | 5 | 23 |
| 3 | ಮಂಗಳೂರು | 2 | 9 | 0 | 0 | 11 | 0 | 1 | 0 | 0 | 1 | 2 | 0 | 1 | 3 | 8 |
| 4 | ಶಿವಮೊಗ್ಗ | 2 | 0 | 0 | 1 | 3 | 0 | 2 | 0 | 1 | 0 | 0 | 0 | 3 | 5 | 11 |
| 5 | ಕಲಬುರಗಿ | 0 | 7 | 2 | 3 | 12 | 0 | 4 | 2 | 5 | 1 | 2 | 0 | 5 | 8 | 27 |
| 6 | ಧಾರವಾಡ | 3 | 21 | 5 | 2 | 31 | 0 | 6 | 2 | 9 | 3 | 2 | 2 | 10 | 15 | 49 |
| | ಒಟ್ಟು | **9** | **68** | **11** | **7** | **95** | **0** | **20** | **7** | **25** | **8** | **8** | **2** | **31** | **46** | **147** |

(ಸೋನಿಕಾ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಾನೂನು ಇಲಾಖೆ (ಮಾನವ ಹಕ್ಕುಗಳು)